# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 415 |
| ಸದಸ್ಯರ ಹೆಸರು | : | ಶ್ರೀ ಅಲ್ಲಂ ವೀರಭದ್ರಪ್ಪ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 04-02-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಬೆಂಗಳೂರಿನಲ್ಲಿ ಸತತವಾಗಿ ಕಳೆದ ಮೇ ತಿಂಗಳಿಂದ ಜನವರಿ-2021 ರವರೆಗೂ ಸತತವಾಗಿ ಮಳೆ ಬಿದ್ದಿದ್ದು, ಹೆಚ್ಚುವರಿ ಮಳೆ ನೀರನ್ನು ಕ್ರೋಢೀಕರಿಸಲು ಯಾವುದಾದರೂ ವಿನೂತನವಾದ ಯೋಜನೆ ಸರ್ಕಾರ ಹಮ್ಮಿಕೊಂಡಿದೆಯೇ; ಹಾಗಿದ್ದಲ್ಲಿ ಇದರ ಬಗ್ಗೆ ಪೂರ್ಣ ಮಾಹಿತಿ ತಿಳಿಸುವುದು? | ಬೆಂಗಳೂರು ನಗರದಲ್ಲಿರುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಪದ್ಧತಿ ಅಳವಡಿಸಿಕೊಳ್ಳಲು ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿ ಬರುವ 216 ಚದರ ಮೀಟರ್ ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣವುಳ್ಳ ನಿವೇಶನದಲ್ಲಿ ಈಗಾಗಲೇ ಕಟ್ಟಡವನ್ನು ನಿರ್ಮಿಸಿದವರಿಗೆ ಮತ್ತು ಹೊಸದಾಗಿ ಕಟ್ಟಡವನ್ನು 108 ಚದರ ಮೀಟರ್ ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣದಲ್ಲಿ ನಿರ್ಮಿಸಿದ್ದರೆ ಕಡ್ಡಾಯವಾಗಿ ಮಳೆ ನೀರು ಕೊಯ್ಲು ಅಳವಡಿಸಬೇಕೆಂದು ಬೆಂಗಳೂರು ಮಂಡಳಿ ಕಾಯ್ದೆ ನಿಯಮ 72(ಎ)ಕ್ಕೆ ತಿದ್ದುಪಡಿ ತರಲಾಗಿರುತ್ತದೆ. ಈ ಪದ್ಧತಿಯನ್ನು ಅಳವಡಿಸಿಕೊಳ್ಳದೆ ಇರುವ ಕಟ್ಟಡಗಳಿಗೆ ಮಾಹೆಯಾನ ಬಿಲ್ಲಿನಲ್ಲಿ ಹೆಚ್ಚುವರಿಯಾಗಿ ದಂಡವನ್ನು ವಿಧಿಸಲಾಗುತ್ತಿದೆ.<br><br>ಮುಂದುವರೆದು, ಮಳೆ ನೀರಿನ ಸಂಗ್ರಹಣೆ ಹಾಗೂ ಮರುಬಳಕೆಗಾಗಿ ಮತ್ತು ಅಂತರ್ಜಲ ವೃದ್ಧಿಸಲು ಬೆಂಗಳೂರು ಜಲಮಂಡಳಿ ವಿನಿಯಮ 72(ಎ) ಗೆ ದಿನಾಂಕ: 06.05.2020 ರಂದು ಈ ಕೆಳಕಂಡಂತೆ ತಿದ್ದುಪಡಿಯನ್ನು ತರಲಾಗಿದೆ.<br><br>• ಕಟ್ಟಡದ ತಾರಸಿ / ಮೇಲ್ಛಾವಣೆಯ ಮೇಲೆ ಬೀಳುವ ಮಳೆ ನೀರು ಸಂಗ್ರಹಣೆಗಾಗಿ ಹಾಗೂ ಮರು ಬಳಕೆಗಾಗಿ ಪ್ರತಿ ಚದರ ಮೀಟರ್‌ಗೆ 20 ಲೀಟರ್‌ನಿಂದ 60 ಲೀಟರ್‌ಗೆ ಹಾಗೂ<br>• ನಡೆದಾಡುವ ಮತ್ತು ಬಯಲು ಪ್ರದೇಶದಲ್ಲಿ ಪ್ರತಿ ಚದರ ಮೀಟರ್‌ಗೆ ಅಂತರ್ಜಲ ವೃದ್ಧಿಸಲು ಮಳೆ ನೀರು ಇಂಗು ಗುಂಡಿಗಳ ನಿರ್ಮಾಣಕ್ಕೆ 10 ಲೀಟರ್‌ನಿಂದ 30 ಲೀಟರ್‌ಗೆ ಹೆಚ್ಚಿಸಿ ಆದೇಶಿಸಲಾಗಿರುತ್ತದೆ. |

ಸಂಖ್ಯೆ: ನಅಇ 23 ಎಂಎನ್‌ಐ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ